**Sub:** Deputation of Dr. L. Hanumanthaiah, Member, Karnataka Legislative Council to attend the 2nd CPA Asia Regional Conference to be held at Colombo, Srilanka from 30th August to 4th September, 2003, Payment of TA/DA and advance TA/DA to the Member L.C.- Sanction reg.

**Read:** 1. Letter dated: 30th June 2003 from Secretary General of Parliament, Hony Secretary & Treasurer, Commonwealth Parliamentary Association addressed to the Secretary, Karnataka Legislative Assembly Secretariat.

2. Itinerary of Hon'ble member of, Karnataka Legislative Council from 28.08.03 to 12.09.2003.

**PREAMBLE:**

The Commonwealth Parliamentary Association, Srilanka Branch has arranged the 2nd CPA Asia Regional Conference at Colombo, Srilanka from 30th August to 4th September 2003. The Joint Presidents of Karnataka Branch of Commonwealth Parliamentary Association, i.e. Hon'ble Chairman, Karnataka Legislative Council and Hon'ble Speaker, Karnataka Legislative Assembly have nominated Dr. L. Hanumanthaiah, Member, Karnataka Legislative Council to attend the said conference. During the conference period Dr. L. Hanumanthaiah, will be the guest of Commonwealth Parliamentary Association of Srilanka Branch. The entire expenditure of the Delegate is borne by the Karnataka Legislative Council Secretariat.

The approximate expenditure in connection with this foreign tour will be as under:

| | | |
|---|---|---|
| (a) | Air Fare | Rs.12,400.00 |
| (b) | Entry Tax (Airport Tax) | Rs. 1,600.00 |
| (c) | Daily Allowance including personal incidentals, etc. | Rs. 4,965.00 |
| | **Total** | **Rs.18,965.00** |

(Rupees Eighteen thousand Nine Hundred and Sixty Five only)

**Government Order No. CPA 23 ARC/SL.2003, Bangalore, Dated: 31st July 2003**

Sanction is accorded for the deputation of Dr. L. Hanumanthaiah, Member, Karnataka Legislative Council to attend the 2nd CPA Asia Regional Conference to be held at Colombo, Srilanka from 30th August to 4th September 2003. He is entitled for admissible amount of advance out of the estimated Travel Expenses of Rs.18,965.00 (Rupees Eighteen thousand Nine Hundred and Sixty Five only) subject to adjustment in the final Traveling Allowance Bill. In addition to this, if there is any claim from the Hon'ble Member regarding local conveyance and rental charges, the said expenditure will also be adjusted in the final Bill.

2. Expenditure on this Account is debitable to the Head of Account "2011-02-102-0-05-041 Travel Expenses.

By order and in the name of the Special Board,

**B.N. PRASAD**

P.R. 1012 Under Secretary, Karnataka Legislative Council.

**KARNATAKA LEGISLATIVE ASSEMBLY SECRETARIAT**

**Sub:** Deputation of Sri Jagadish Shettar, MLA & Hon'ble Leader of Opposition, Karnataka Legislative Assembly to attend the 2nd CPA Asia Regional Conference to be held at Colombo, Srilanka from 30th August to 4th September, 2003, Payment of TA/DA and advance TA/DA to Hon'ble Leader of Opposition, L.A.- Sanction reg.

**Read:** 1. Letter dated: 30th June 2003 from Secretary General of Parliament, Hony Secretary & Treasurer, Commonwealth Parliamentary Association addressed to the Secretary, Karnataka Legislative Assembly Secretariat.

2. Itinerary of Hon'ble Leader of Opposition, LA from 28.08.03 to 12.09.2003.

**PREAMBLE:**

The Commonwealth Parliamentary Association, Srilanka Branch has arranged the 2nd CPA Asia Regional Conference at Colombo, Srilanka from 30th August to 4th September 2003. The Joint Presidents of Karnataka Branch of Commonwealth Parliamentary Association, i.e. Hon'ble Chairman, Karnataka Legislative Council and Hon'ble Speaker, in Karnataka Legislative Assembly have nominated Sri Jagadish Shettar, MLA & Hon'ble Leader of Opposition, in Karnataka Legislative Assembly to attend the said conference. During the conference period Sri Jagadish Shettar will be the guest of Commonwealth Parliamentary Association of Srilanka Branch. The entire expenditure of the Delegate is borne by the Karnataka Legislative Assembly Secretariat.

The approximate expenditure in connection with this foreign tour will be as under:

| | | |
|---|---|---|
| (a) | Air Fare | Rs.23,215.00 |
| (b) | Entry Tax (Airport Tax) | Rs. 1,600.00 |
| (c) | Daily Allowance including personal incidentals, etc. | Rs. 5,565.00 |
| | **Total** | **Rs.30,380.00** |

(Rupees Thirty Thousand Three Hundred and Eighty only)

**Government Order No. CPA 23 ARC/SL.2003, Bangalore, Dated: 31st July 2003**

Sanction is accorded for the deputation of Sri Jagadish Shettar, MLA & Hon'ble Leader of Opposition, Karnataka Legislative Assembly to attend the 2nd CPA Asia Regional Conference to be held at Colombo, Srilanka from 30th August to 4th September 2003. He is entitled for admissible amount of advance out of the estimated Travel Expenses of Rs. 30,380-00 (Rupees Thirty Thousand Three Hundred and Eighty only) subject to adjustment in the final Traveling Allowance Bill. In addition to this, if there is any claim from the Hon'ble Leader of Opposition regarding local conveyance and rental charges, the said expenditure will also be adjusted in the final Bill.

2. Expenditure on this Account is debitable to the Head of Account "2011-02-101-0-03-041 Travel Expenses.

By order and in the name of the Special Board,

**T. RAJANNA**

P.R. 1013

Secretary, Karnataka Legislative Assembly.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ.ವಿ. ನಟರಾಜನ್, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 97 ಎಸ್‌ಇಎನ್ 2001, ದಿನಾಂಕ: 22.11.2002.
2. ಶ್ರೀ ಎಂ. ಉಮೇಶ್, ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ರವರ ದಿನಾಂಕ: 7.3.2003ರ ವಿಚಾರಣಾ ವರದಿ.
3. ನೋಟೀಸ್ ಕ್ರಮಾಂಕ: ಸಿಆಸುಇ 97 ಎಸ್‌ಇಎನ್ 2001, ದಿನಾಂಕ: 31.3.2003.
4. ಶ್ರೀ ಬಿ.ವಿ. ನಟರಾಜನ್, ಸರ್ಕಾರದ ಉಪ ಕಾರ್ಯದರ್ಶಿ ಅವರ ಉತ್ತರ ದಿನಾಂಕ: 22.4.2003.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಕಾರ್ಮಿಕ ಇಲಾಖೆಯ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕಾರ್ಮಿಕ ಇಲಾಖೆಯ ನೌಕರರೊಬ್ಬರನ್ನು ವೀರಾಜಪೇಟೆಯಿಂದ ಬೆಂಗಳೂರಿಗೆ ವರ್ಗಾವಣೆ ಮಾಡುವಂತೆ ಕಾರ್ಮಿಕ ಆಯುಕ್ತರಿಗೆ ದಿನಾಂಕ: 22.6.2001 ರಂದು ನೀಡಲಾದ ಸೂಚನೆಯಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಬಗ್ಗೆ ಸರ್ಕಾರದ ಮಾರ್ಗಸೂಚನೆಗಳನ್ನು ನೀಡಿ ಹೊರಡಿಸಲಾಗಿದ್ದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 5 ಸೇನೌವ 2001, ದಿನಾಂಕ: 25.4.2001 ರಲ್ಲಿನ ಮಾರ್ಗಸೂಚಿಗಳನ್ನು ನಿರ್ಲಕ್ಷಿಸಿದ ಆರೋಪಕ್ಕಾಗಿ ಶ್ರೀ ಬಿ.ವಿ. ನಟರಾಜನ್, ಸರ್ಕಾರದ ಉಪ ಕಾರ್ಯದರ್ಶಿ, ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 22.11.2002 ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಂ. ಉಮೇಶ್, ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 7.3.2003ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿದ್ದರು.

ಶ್ರೀ ಬಿ.ವಿ. ನಟರಾಜನ್ ರವರು ಕಾರ್ಮಿಕ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 25.4.2001ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 5 ಸೇನೌವ 2001ರ ಪ್ರಕಾರ ವರ್ಗಾವಣೆಗಳಿಗೆ ಕಡತದ ಮೇಲೆ ಸಂಬಂಧಪಟ್ಟ ಸಚಿವರ ಮುಖಾಂತರ ಮುಖ್ಯ ಮಂತ್ರಿಯವರ ಅನುಮೋದನೆ ಪಡೆಯಬೇಕೆಂಬ ವಿಷಯ ತಿಳಿದಿದ್ದರೂ ಸಹ ಹಾಗೆ ಮಾಡದೇ ದಿನಾಂಕ: 14.6.2001ರ ಕ್ರಮ ಸಂಖ್ಯೆ: ಕಾಇ 147 ಎಲ್‌ಇಟಿ 2001ರ ಪತ್ರದಲ್ಲಿ ಶ್ರೀ ಮೊಹಬೂಬ್ ಮುನಾವರ್, ಹಿರಿಯ ಕಾರ್ಮಿಕ ನಿರೀಕ್ಷಕರು, ಒಂದನೇ ವೃತ್ತ, ಗುಲ್ಬರ್ಗ ಇವರನ್ನು ಬೆಂಗಳೂರು 2ನೇ ವೃತ್ತಕ್ಕೆ ವರ್ಗಾಯಿಸಲು ಮತ್ತು ದಿನಾಂಕ: 22.6.2001ರ ಪತ್ರ ಸಂಖ್ಯೆ: ಕಾಇ 156 ಎಲ್‌ಇಟಿ 2001 ರಲ್ಲಿ ಶ್ರೀ ಎಂ.ಎಂ. ಕೃಷ್ಣಮೂರ್ತಿ ಹಿರಿಯ ಕಾರ್ಮಿಕ ನಿರೀಕ್ಷಕರು, ವೀರಾಜಪೇಟೆ ಇವರನ್ನು ಬೆಂಗಳೂರಿನ 6ನೇ ವೃತ್ತ ಅಥವಾ 12ನೇ ವೃತ್ತಕ್ಕೆ ವರ್ಗಾಯಿಸಿ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಜರೂರಾಗಿ ಸಲ್ಲಿಸಲು ಕಾರ್ಮಿಕ ಆಯುಕ್ತರಿಗೆ ಸೂಚನೆ ಕೊಟ್ಟಿರುವುದು ಮೂಡಿಬಂದಿದೆ. ಈ ಕೃತ್ಯ ಯಾವುದೇ ದುರುದ್ದೇಶದಿಂದ ಕೂಡಿದ್ದು ಎಂದು ಸಾಬೀತಾಗದಿದ್ದರೂ ಸಹಾ ಆ ಎರಡು ಪತ್ರಗಳನ್ನು ಹೊರಡಿಸುವಲ್ಲಿ ಆಪಾದಿತ ಅಧಿಕಾರಿ ಸರ್ಕಾರದ ನಿರ್ದೇಶನಗಳನ್ನು ಪಾಲಿಸದೇ ಇರುವುದನ್ನು ತೋರಿಸಿಕೊಟ್ಟಿರುತ್ತಾರೆ. ಆರೋಪ ಸಾಬೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು ಹಾಗೂ ಶ್ರೀ ಬಿ.ವಿ. ನಟರಾಜನ್ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 31.3.2003ರ ಎರಡನೇ ಕಾರಣ ಕೇಳುವ ನೋಟೀಸ್‌ನೊಡನೆ ವಿಚಾರಣಾ ವರದಿಯನ್ನು ಒದಗಿಸಿ ಆ ಬಗ್ಗೆ

ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸಿಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 22.4.2003ರ ಉತ್ತರ ಸಲ್ಲಿಸಿದ ಆರೋಪಿಯು ಈ ಪ್ರಕರಣಗಳಲ್ಲಿ ವಿಷಯ ನಿರ್ವಾಹಕರು ಹಾಗೂ ಶಾಖಾಧಿಕಾರಿಗಳನ್ನು ಈ ಆಪಾದನೆಯಿಂದ ವಿಮುಕ್ತಿಗೊಳಿಸಲಾಗಿದೆ. ಇದರಿಂದಾಗಿ ತಾನು ಯಾವುದೇ ದುರುದ್ದೇಶ ಹಾಗೂ ಅಧಿಕಾರದ ದುರುಪಯೋಗ ಮಾಡಿಲ್ಲವೆಂದು ಈ ವರ್ಗಾವಣೆಯ ಪ್ರಕರಣಗಳು ಆಕಸ್ಮಿಕವಾಗಿ ನಡೆದಿರುವುದರಿಂದ ಇನ್ನು ಮುಂದೆ ಇಂತಹ ಘಟನೆಗಳು ಪುನರಾವರ್ತನೆಯಾಗದಂತೆ ನೋಡಿಕೊಳ್ಳುವುದಾಗಿ ತಿಳಿಸಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದರಾದರೂ ಅವರು ಕೋರಿಕೆಗೆ ಯಾವುದೇ ಸಮರ್ಥನೆಯನ್ನು ನೀಡಿಲ್ಲ. ಸ್ವೀಕಾರಾರ್ಹವಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಯಾವುದೇ ಹೊಸ ಅಂಶಗಳಿಂದ ಕೂಡಿರದ ಅವರ ಉತ್ತರವನ್ನು ಒಪ್ಪದೇ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಎಸ್ಇಎನ್ 2001, ಬೆಂಗಳೂರು, ದಿನಾಂಕ: 30ನೇ ಜುಲೈ 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ವಿ. ನಟರಾಜನ್, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1015

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಸಿ. ಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 54 ಎಸ್ಇಎನ್ 2002, ದಿನಾಂಕ: 21.6.2002.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾನೂನು ಕೋಶದಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಸಿ. ಚಂದ್ರಯ್ಯ ಅವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 23(1) ರನ್ವಯ ಆಯಾ ವರ್ಷದ ಆಸ್ತಿ:ಋಣ ಪಟ್ಟಿಯನ್ನು ಏಪ್ರಿಲ್ ತಿಂಗಳ ಅಂತ್ಯದೊಳಗಾಗಿ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವುದು ಅವರ ಆದ್ಯ ಕರ್ತವ್ಯವಾಗಿದ್ದರೂ ಸಹ 1995-1996 ರಿಂದ ಇದುವರೆವಿಗೂ ಆಸ್ತಿ:ಋಣ ಪಟ್ಟಿಗಳನ್ನು ಸಲ್ಲಿಸದೇ ನಡತೆ ನಿಯಮಗಳನ್ನು ಉಲ್ಲಂಘಿಸಿದ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12 ರನ್ವಯ ಅವರಿಗೆ ಮೇಲೆ ಓದಲಾದ ದಿನಾಂಕ: 21.6.2002ರ ನೋಟೀಸನ್ನು ಜಾರಿ ಮಾಡುವ ಮೂಲಕ ಅವರ ವಿರುದ್ಧ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯು ಉತ್ತರಿಸಿರುವುದಿಲ್ಲ. ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ ಅವರ ಸ್ಥಿರಾಸ್ತಿ-ಚರಾಸ್ತಿಗಳನ್ನು ನಿರ್ವಹಿಸುವ ಕಡತದ ಸಂಖ್ಯೆ: ಸಿಆಸುಇ 36 ವಾಆಹೊ 84ನ್ನು ಪರಿಶೀಲಿಸಲಾಗಿ 1994ರ ಸ್ಥಿರಾಸ್ತಿ-ಚರಾಸ್ತಿ ಮಾಹಿತಿಯನ್ನು ನೀಡಿದ್ದನ್ನು ಬಿಟ್ಟರೆ, ಅನಂತರ ಸಲ್ಲಿಸಿಲ್ಲ. ಅವುಗಳನ್ನು ಸಲ್ಲಿಸುವಂತೆ 1995 ರಲ್ಲಿ ಎರಡು ಬಾರಿ ನಿರ್ದೇಶನ ನೀಡಲಾಗಿದೆ. ಅನಂತರ 1.7.2000 ದಲ್ಲಿ ಅಧೀನ ಕಾರ್ಯದರ್ಶಿಯಾಗಿ ಪದೋನ್ನತಿ ಹೊಂದಿದ ನಂತರ ಸ್ಥಿರಾಸ್ತಿ-ಚರಾಸ್ತಿಗಳ ಮಾಹಿತಿಯನ್ನು ಸಲ್ಲಿಸಲು ತಿಳಿಸಿ ದಿನಾಂಕ: 18.7.2000, 27.12.2000, 12.3.2001ರ ಪತ್ರಗಳನ್ನು ಬರೆಯಲಾಗಿದೆ. ಇವುಗಳಿಗೆ ಸ್ಪಂದಿಸದಿದ್ದಾಗ ದಿನಾಂಕ: 19.10.2001ರ ಆಡಳಿತಾತ್ಮಕ ನೋಟೀಸ್ ನೀಡಲಾಗಿದೆ. ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿಯವರು ಇದಕ್ಕೂ ಉತ್ತರಿಸದ ಕಾರಣ ಶಿಸ್ತು ಕ್ರಮ ಜರುಗಿಸಲಾಗಿದೆ. ನಿಯಮಾನುಸಾರ ನೀಡಲಾದ ನೋಟೀಸಿಗೂ ಶ್ರೀ ಚಂದ್ರಯ್ಯ, ಅಧೀನ ಕಾರ್ಯದರ್ಶಿ ಅವರು ಉತ್ತರ ನೀಡದಿರುವುದನ್ನು ಗಮನಿಸಿದ ಸರ್ಕಾರವು ದಾಖಲೆ ಹಾಗೂ ವಾಸ್ತವಾಂಶಗಳನ್ನು ಪರಿಶೀಲಿಸಿ ಅವರಿಂದ ದುರ್ನಡತೆ ಉಂಟಾಗಿರುವುದನ್ನು ಮನಗಂಡು ಇದಕ್ಕಾಗಿ ದಂಡನೆ ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 54 ಎಸ್ಇಎನ್ 2002, ಬೆಂಗಳೂರು, ದಿನಾಂಕ: 31ನೇ ಜುಲೈ 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ. ಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ (without cumulative affect) ತಡೆ ಹಿಡಿಯಲು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1016

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ನೂರ್ ಅಹ್ಮದ್ ಬಾಬುಸಾಹೇಬ್, ಹುಬ್ಬಳ್ಳಿ, ವಕೀಲರು, ಮುಧೋಳ, ಬಾಗಲಕೋಟೆ ಜಿಲ್ಲೆ ಇವರನ್ನು ಮುಧೋಳ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಹೆಚ್ಚುವರಿ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 2.12.02 ರ ಸರ್ಕಾರಿ ಆದೇಶ ಸಂಖ್ಯೆ: ಲಾ 71 ಎಲ್‌ಸಿಎಲ್ 2001.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ರವರ ಪತ್ರ ಸಂಖ್ಯೆ: 2037:2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 2.12.2002 ರ ಸರ್ಕಾರಿ ಆದೇಶದಲ್ಲಿ ಬಾಗಲಕೋಟೆ ಜಿಲ್ಲೆಯ ಮುಧೋಳ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ: 17.5.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 71 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ: 9ನೇ ಜುಲೈ 2003**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ನೂರ್ ಅಹ್ಮದ್ ಬಾಬುಸಾಹೇಬ್ ಹುಬ್ಬಳ್ಳಿ, ವಕೀಲರು, 381:4, ನಸೀಮ್ ಮಂಜಲ್, ಮುಖ್ಯ ರಸ್ತೆ ಮುಧೋಳ, ಬಾಗಲಕೋಟೆ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮುಧೋಳ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು, "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 917

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2)

**ವಿಷಯ:** ಮೈಸೂರು ಜಿಲ್ಲೆಯ ಚಾಮರಾಜನಗರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 309 ಎಲ್‌ಸಿಇ 2001, ದಿನಾಂಕ: 6.5.2002.

2) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ: ಜಿಒಬಿ 2, 151 (2) 2003, ದಿನಾಂಕ: 26.5.2003.

**ಪ್ರಸ್ತಾವನೆ:**

ಮೈಸೂರು ಜಿಲ್ಲೆಯ ಚಾಮರಾಜನಗರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯವನ್ನು ಮೇಲೆ ಓದಲಾದ (1)ರ ದಿನಾಂಕ: 6.5.2002ರ ಸರ್ಕಾರಿ ಆದೇಶದಲ್ಲಿ ಕೆಲವು ಷರತ್ತುಗಳೊಂದಿಗೆ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 5.5.2003ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 6.5.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 26.5.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 116 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 16ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೈಸೂರು ಜಿಲ್ಲೆಯ ಚಾಮರಾಜನಗರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 6.5.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 918

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1)

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಜೆಎಂಎಫ್‌ಸಿ (5ನೇ ನ್ಯಾಯಾಲಯ) ಮತ್ತು ಬೆಳ್ತಂಗಡಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಇ 2002, ದಿನಾಂಕ: 25.6.2002.
2) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ: ಜಿಒಬಿ 2:151 (11) 2003, ದಿನಾಂಕ: 13.5.2003.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಜೆಎಂಎಫ್‌ಸಿ (5ನೇ ನ್ಯಾಯಾಲಯ) ಮತ್ತು ಬೆಳ್ತಂಗಡಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ನ್ಯಾಯಾಲಯವನ್ನು ಮೇಲೆ (1)ರ ದಿನಾಂಕ: 25.6.2002 ಸರ್ಕಾರಿ ಆದೇಶದಲ್ಲಿ ಕೆಲವು ಷರತ್ತುಗಳೊಂದಿಗೆ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 24.6.2003ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.5.2003 ರಿಂದ ಒಂದು ವರ್ಷದ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 13.5.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 121 ಎಲ್ಎಸಿ 2003, ಬೆಂಗಳೂರು, ದಿನಾಂಕ: 16ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಜೆಎಂಎಫ್‌ಸಿ (5ನೇ ನ್ಯಾಯಾಲಯ) ಮತ್ತು ಬೆಳ್ತಂಗಡಿಯ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.6.2003 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 920

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಬೆಂಗಳೂರಿನ 32ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಸಿಇ 99, ದಿನಾಂಕ: 8.6.2000.
2) ಸರ್ಕಾರಿ ಆದೇಶ ಸಂಖ್ಯೆ: ಲಾ 86 ಎಲ್ಎಸಿ 2001, ದಿನಾಂಕ: 9.4.2001.
3) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: ಜಿಒಬಿ 2 151(1) 2003, ದಿನಾಂಕ: 26.5.2003.

**ಪ್ರಸ್ತಾವನೆ:**

ಬೆಂಗಳೂರಿನ 32ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು (ಸಿ.ಬಿ.ಐ. ಪ್ರಕರಣಗಳ ನ್ಯಾಯ ವಿಚಾರಣೆಗಾಗಿ) ನ್ಯಾಯಾಲಯವನ್ನು ಮೇಲೆ ಓದಲಾದ (1)ರ ದಿನಾಂಕ: 8.6.2000ರ ಸರ್ಕಾರಿ ಆದೇಶದಲ್ಲಿ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಮತ್ತು ಮೇಲೆ ಓದಲಾದ (2)ರ ದಿನಾಂಕ: 9.4.2001ರ ಸರ್ಕಾರಿ ಆದೇಶದಲ್ಲಿ ದಿನಾಂಕ: 8.6.2001 ರಿಂದ 7.6.2003 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 7.6.2003 ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 8.6.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 26.5.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 117 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 12ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಂಗಳೂರಿನ 32ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 8.6.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 921

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಇ 2002, ದಿನಾಂಕ: 25.6.2002.

2) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: ಜಿಒಬಿ 2 151(13) 2003, ದಿನಾಂಕ: 30.4.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯವನ್ನು ಮೇಲೆ ಓದಲಾದ (1)ರ ದಿನಾಂಕ: 25.6.2002ರ ಸರ್ಕಾರಿ ಆದೇಶದಲ್ಲಿ ಕೆಲವು ಷರತ್ತುಗಳೊಂದಿಗೆ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 24.6.2003ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.6.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 30.4.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 113 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 11ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡ ಬಳ್ಳಾಪುರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.6.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 922

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1)

**ವಿಷಯ:** ರಾಯಚೂರು ಜಿಲ್ಲೆಯ ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 87 ಎಲ್‌ಎಸಿ 2001, ದಿ: 31.3.2001.

2) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: ಜಿಒಬಿ 2 151(9) 2003, ದಿನಾಂಕ: 20.5.2003.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆಯ ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯವನ್ನು ಮೇಲೆ ಓದಲಾದ (1)ರ ದಿನಾಂಕ: 31.3.2001ರ ಸರ್ಕಾರಿ ಆದೇಶದಲ್ಲಿ ದಿನಾಂಕ: 27.5.2001 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 26.5.2003ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 27.5.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 20.5.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 125 ಎಲ್ಎಸಿ 2002, ಬೆಂಗಳೂರು, ದಿನಾಂಕ: 25ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ರಾಯಚೂರು ಜಿಲ್ಲೆಯ ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 27.5.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 923

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಬಿಜಾಪುರ, ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಎನ್:ಟಿಎಂಕೆ:239:2002, ದಿನಾಂಕ: 30.5.2002.
2) ಶ್ರೀ ಆರ್.ಆರ್. ಭಟಕುರ್ಕಿ, ಇವರಿಗೆ ಜಾರಿ ಮಾಡಲಾದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಲಾ 162 ಪಿಪಿಇ 02 ದಿನಾಂಕ: 20.12.2002.
3) ಶ್ರೀ ಆರ್.ಆರ್. ಭಟಕುರ್ಕಿ, ಇವರ ರಕ್ಷಣಾತ್ಮಕ ಹೇಳಿಕೆ ದಿನಾಂಕ: 2.1.2003.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998.

**ಪ್ರಸ್ತಾವನೆ:**

ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಬಿಜಾಪುರ, ಇವರು ಈ ಹಿಂದೆ ಬೆಂಗಳೂರಿನ ಮುಖ್ಯ ಕಛೇರಿಯಲ್ಲಿ ಅಭಿಯೋಗ ಉಪ ನಿರ್ದೇಶಕರು (ಕ್ರಿಮಿನಲ್) ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ತುಮಕೂರು ಪ್ರಧಾನ ಸಿಜೆಎಂ ನ್ಯಾಯಾಲಯದ ಸಿ.ಸಿ. ನಂ. 3873:93 ಆರೋಪ ಶ್ರೀ ಶಮೀಮ್ ಬಾನು, ಅಪರಾದ ಕಲಂ 14 ವಿದೇಶಿ ಕಾಯಿದೆ 1939ರ ಪ್ರಕರಣದಲ್ಲಿ ಕಡತವನ್ನು ಕೂಲಂಕಷವಾಗಿ ಪರಿಶೀಲಿಸದೇ ಕಾನೂನು ಅಂಶಗಳನ್ನು ಆಳವಾಗಿ ಅಭ್ಯಸಿಸದೇ ಕರ್ತವ್ಯ ನಿರ್ಲಕ್ಷ್ಯ ತೋರಿ, ಬೇಜವಾಬ್ದಾರಿತನದಿಂದ ವರ್ತಿಸಿ, ಸದರಿ ಪ್ರಕರಣದಲ್ಲಿ ಆರೋಪಿಯ ಬಿಡುಗಡೆ ಆದೇಶವು ಸಮರ್ಪಕವಿದ್ದು ಮೇಲ್ಮನವಿಗೆ ಅರ್ಹವಿಲ್ಲವೆಂದು ಕಡತವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿಯೇ ಮುಕ್ತಾಯಗೊಳಿಸಿದ ಬಗ್ಗೆ ವಿವರಣೆ ಸಲ್ಲಿಸುವಂತೆ ಕೇಳಲಾಗಿದ್ದು ಅವರು ಸಲ್ಲಿಸಿರುವ ವಿವರಣೆ ಸಮಂಜಸ ಹಾಗೂ ತೃಪ್ತಿಕರವಾಗಿರುವುದಿಲ್ಲದಿರುವುದರಿಂದ ಕೆಸಿಎಸ್ (ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪ ನಿಯಮ (ii) ಮತ್ತು (iii)ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಆರ್.ಆರ್. ಭಟಕುರ್ಕಿ ಇವರ ವಿರುದ್ಧದ ಆರೋಪಗಳ ಬಗ್ಗೆ ಅವರಿಗೆ ಸರ್ಕಾರವು 1957ರ ಕೆಸಿಎಸ್ (ಸಿಸಿಎ) ನಿಯಮಾವಳಿ ನಿಯಮ 11ರ ಮೇರೆಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ: 20.12.2003 ರಂದು ಜಾರಿ ಮಾಡಿ, ದೋಷಾರೋಪಗಳ ಬಗ್ಗೆ ತಮ್ಮ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಬೇಕೆಂದು ಮೇಲೆ ಓದಲಾದ (2) ರಲ್ಲಿ ನಿರ್ದೇಶನ ನೀಡಲಾಗಿತ್ತು.

ಶ್ರೀ ಆರ್.ಆರ್. ಭಟಕುರ್ಕಿಯವರು ಮೇಲೆ ಓದಲಾದ (3)ರಲ್ಲಿ ಸರ್ಕಾರಕ್ಕೆ ದಿನಾಂಕ: 2.1.2003 ರಂದು ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದು, ಹೇಳಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ತನ್ನ ಮೇಲಿನ ಆರೋಪವನ್ನು ಮುಕ್ತಾಯಗೊಳಿಸುವಂತೆ ಪ್ರಾರ್ಥಿಸಿದ್ದಾರೆ.

ಶ್ರೀ ಆರ್.ಆರ್. ಭಟಕುರ್ಕಿ ರವರು ಸಲ್ಲಿಸಿದ ಅವರ ಲಿಖಿತ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ, ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯು ಒಪ್ಪುವಂತಹದಲ್ಲವಾದ್ದರಿಂದ, ಸದರಿ ಆರೋಪಿ ಸರ್ಕಾರಿ ನೌಕರರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಮೇಲೆ (4) ರಲ್ಲಿ ಓದಲಾದ ದಿನಾಂಕ: 24.4.1998ರ ಆದೇಶದನ್ವಯ ಈ ಕೆಳಕಾಣಿಸಿದಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 162 ಪಿಪಿಇ 2002, ಬೆಂಗಳೂರು, ದಿನಾಂಕ: 2ನೇ ಮೇ 2003**

ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಬಿಜಾಪುರ (ಹಿಂದಿನ ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು) ಇವರ ವಿರುದ್ಧದ ಆಪಾದನೆಯ ಬಗ್ಗೆ 1957ರ ಕೆ.ಸಿ.ಎಸ್ (ವ.ನಿ ಮತ್ತು ಮೇ) ನಿಯಮಗಳ 11ನೇ ನಿಯಮದ ಉಪ ನಿಯಮ (2) ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.4.98ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11 'ಎ' ರನ್ವಯ ಶ್ರೀಯುತ ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಡೋರ್ ನಂ. 91, 19ನೇ ಮುಖ್ಯ ರಸ್ತೆ, 17ನೇ ಅಡ್ಡ ರಸ್ತೆ, ಒಂದನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010 ಇವರನ್ನು ಪ್ರತಿಯೊಂದು ಪ್ರಕರಣಕ್ಕೆ ರೂ. 5,000 (ರೂಪಾಯಿ ಐದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆ (ಕನ್ಸಾಲಿಡೇಟೆಡ್ ರೆಮ್ಯುನರೇಷನ್) ಹಾಗೂ ರೂ. 1,000 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆ, (ಕನ್‌ವೇಯನ್ಸ್ ಅಲೋಯನ್ಸ್) ನೀಡುವ ಆಧಾರದ ಮೇಲೆ ವಿಚಾರಣಾಧಿಕಾರಿಯವರನ್ನಾಗಿ ಹಾಗೂ ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಸದರಿ ನಿಯಮಗಳ ನಿಯಮ 11(5)(ಸಿ) ರನ್ವಯ ಶ್ರೀ ಮೋಹನ್ ಟಿ. ಕುಲಕರ್ಣಿ, ಅಭಿಯೋಗ ಉಪ ನಿರ್ದೇಶಕರು, ಬೆಳಗಾವಿ, ಇವರನ್ನು ಮಂಡನಾಧಿಕಾರಿಯಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಿದೆ.

1. ಇಲಾಖಾ ವಿಚಾರಣೆಯನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರ ಕಛೇರಿಯಲ್ಲಿ ನಡೆಸತಕ್ಕದ್ದು.
2. ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ : ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
3. ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ರೂ. 5,000 ಸಂಚಿತ ಸಂಭಾವನೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5. ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿನ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಡಿಯಲ್ಲಿ ಒದಗಿಸಲಾದ ಮೊತ್ತದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 924

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ಇಲಾಖೆ.

**ವಿಷಯ:** ಕೋಲಾರ ಜಿಲ್ಲೆಯ ಶ್ರೀನಿವಾಸಪುರದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 230 ಎಲ್ಎಸಿ 2000 ದಿನಾಂಕ: 8.6.2001.
2) ಸರ್ಕಾರಿ ಆದೇಶ ಸಂಖ್ಯೆ: ಲಾ 159 ಎಲ್‌ಸಿಇ 2002, ದಿನಾಂಕ: 4.11.2002.
3) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: ಜಿಒಬಿ - 2, 151(7) 2003, ದಿನಾಂಕ: 30.4.2003.

**ಪ್ರಸ್ತಾವನೆ:**

ಪೈಲಟ್ ಪ್ರಾಜೆಕ್ಟ್ ಯೋಜನೆಯಡಿಯಲ್ಲಿ ಸ್ಥಾಪಿಸಲಾದ ಕೋಲಾರ ಜಿಲ್ಲೆಯ ಬಾಗೇಪಲ್ಲಿಯ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಕಾರ್ಯಾವಧಿಯನ್ನು ದಿನಾಂಕ: 30.6.2003 ರವರೆಗೆ ಮುಂದುವರೆಸಲು ಮೇಲೆ ಓದಲಾದ (1)ರ ದಿನಾಂಕ: 8.6.2001 ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದ್ದು, ಸದರಿ ನ್ಯಾಯಾಲಯವನ್ನು ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಮೇಲೆ ಓದಲಾದ 2ರಲ್ಲಿ ದಿನಾಂಕ: 4.11.2002ರ ಸರ್ಕಾರಿ ಆದೇಶದಲ್ಲಿ ಶ್ರೀನಿವಾಸ ಪುರಕ್ಕೆ ಸ್ಥಳಾಂತರಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಮತ್ತು ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 30.6.2003 ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ ಸದರಿ ನ್ಯಾಯಾಲಯ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.7.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (3)ರ ದಿನಾಂಕ: 30.4.2003ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 119 ಎಲ್ಎಸಿ 2003, ಬೆಂಗಳೂರು, ದಿನಾಂಕ: 21ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.7.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 925

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಆಡಳಿತ-1)

**ವಿಷಯ:** ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಮತ್ತು ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 49 ಎಲ್‌ಎಸಿ 2001, ದಿನಾಂಕ: 12.4.2001.
2) ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಓಬಿ: 2, 282(13) 2002, ದಿನಾಂಕ: 21.1.2003.

**ಪ್ರಸ್ತಾವನೆ:**

ರಾಯಚೂರಿನ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ದಿನಾಂಕ: 1.4.2001 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (1)ರ ದಿನಾಂಕ: 12.4.2001ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಅವುಗಳ ಕಾರ್ಯಾವಧಿಯು ದಿನಾಂಕ: 31.3.2003ಕ್ಕೆ ಪೂರ್ಣಗೊಂಡಿರುತ್ತವೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ರಾಯಚೂರು.
2. ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಯಚೂರು.

ಸದರಿ ನ್ಯಾಯಾಲಯಗಳಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಮತ್ತು ಕ್ರಮವಾಗಿ 11 ಮತ್ತು 15 ವರ್ಷಗಳ ಕಾಲ ಅಸ್ತಿತ್ವದಲ್ಲಿರುವುದರಿಂದ ಸದರಿ ನ್ಯಾಯಾಲಯಗಳ ಪ್ರಿಸ್ಯೆಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2003 ರಿಂದ ಅವುಗಳ ಕಾರ್ಯಾವಧಿಯನ್ನು ಖಾಯಂ ಆಗಿ ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 21.1.2003 ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 56 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 7ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸ್ಯೆಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ರಾಯಚೂರು.
2. ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಯಚೂರು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 926

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಆಡಳಿತ-1)

**ವಿಷಯ:** ಹಾವೇರಿ ಜಿಲ್ಲೆಯ ರಾಣೆಬೆನ್ನೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಇ 2002, ದಿನಾಂಕ: 25.6.2002.
2) ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ: ಜಿಓಬಿ-2-151 (10) 2003, ದಿನಾಂಕ: 13.5.2003.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆಯ ರಾಣೆಬೆನ್ನೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯವನ್ನು ಮೇಲೆ ಓದಲಾದ (1)ರ ದಿನಾಂಕ: 25.6.2002 ಸರ್ಕಾರಿ ಆದೇಶದಲ್ಲಿ ಕೆಲವು ಷರತ್ತುಗಳೊಂದಿಗೆ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 24.6.2003ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ ಸದರಿ ನ್ಯಾಯಾಲಯಕ್ಕೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.6.2003 ರಿಂದ ಎರಡು ವರ್ಷಗಳ ಅವಧಿಗೆ ಸದರಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (2)ರ ದಿನಾಂಕ: 13.5.2003 ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 120 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 12ನೇ ಜೂನ್ 2003**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಹಾವೇರಿ ಜಿಲ್ಲೆಯ ರಾಣಿಬೆನ್ನೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 25.6.2003 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಾಂಗ ಪರಿಪಾಲನೆ-105-ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು-01-ಸಿಬ್ಬಂದಿ ವೆಚ್ಚಗಳು-ವೇತನಗಳು-ಅಧಿಕಾರಿಗಳು-ಸಿಬ್ಬಂದಿ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 927

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಆಡಳಿತ-1)

**ವಿಷಯ:** ಶ್ರೀ ಅಶೋಕ ಹನುಮಂತರಾವ್ ಕುಲಕರ್ಣಿ, ವಕೀಲರು, ಬಾದಾಮಿ, ಬಾಗಲಕೋಟೆ ಜಿಲ್ಲೆ ಇವರನ್ನು ಬಾದಾಮಿ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ನೋಟರಿಯಾಗಿ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 10.6.02 ರ ಸರ್ಕಾರಿ ಆದೇಶ ಸಂಖ್ಯೆ: ಲಾ 277 ಎಲ್‌ಸಿಎಲ್ 2001.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ರವರ ಪತ್ರ ಸಂಖ್ಯೆ: 2036-2003, ದಿನಾಂಕ: 4.6.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 10.6.2002 ರ ಸರ್ಕಾರಿ ಪತ್ರದಲ್ಲಿ ಶ್ರೀ ನೊರೊಂದಪ್ಪ ಬಸಪ್ಪ ಕತ್ತಿಕೈ, ನೋಟರಿ, ಬಾದಾಮಿ ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ಕೋರಲಾಗಿತ್ತು. ಮೇಲೆ ಓದಲಾಗಿರುವ (2) ದಿನಾಂಕ: 4.6.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 277 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ: 16ನೇ ಜುಲೈ 2003**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಅಶೋಕ ಹನುಮಂತರಾವ್ ಕುಲಕರ್ಣಿ, ವಕೀಲರು, ದತ್ತಾತ್ರೇಯ ದೇವಸ್ಥಾನ ರಸ್ತೆ, ಬಾದಾಮಿ-587201. ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಾದಾಮಿ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು, "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 928

**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-2)

## ಲೋಕೋಪಯೋಗಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಲೋಇ 108 ಸೇಎಸು 2003, ಬೆಂಗಳೂರು ದಿನಾಂಕ: 17ನೇ ಜುಲೈ 2003

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ: 27.4.1978 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ/ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರಿವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ, ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ, ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 11.4.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 84 ಎಸ್‌ಪಿಜಿ 2002 ರಲ್ಲಿ ಪ್ರಕಟಿಸಲಾಗಿದೆ.

ಶ್ರೀ ಜಿ.ಟಿ. ಚಂದ್ರಶೇಖರಪ್ಪ, ಅಂದಿನ ಕಾರ್ಯಪಾಲಕ ಇಂಜಿನಿಯರ್ ರವರು ಕಾರ್ಯಪಾಲಕ ಇಂಜಿನಿಯರ್ ಪದವೃಂದದಲ್ಲಿ ತಮಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ವಿ. ಲಿಂಗರಾಜಯ್ಯ ಮತ್ತು ಇತರರಿಗೆ ಅಧೀಕ್ಷಕ ಇಂಜಿನಿಯರ್ ಹುದ್ದೆಗೆ ದಿನಾಂಕ: 24.10.2000 ರಿಂದ ಪದೋನ್ನತಿ ನೀಡಿರುವುದರಿಂದ, ತಮಗೂ ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಪದೋನ್ನತಿ ನೀಡಬೇಕೆಂದು ನಿರ್ದೇಶನ ನೀಡುವಂತೆ ಕೋರಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ. 10888/2002 ಅನ್ನು ಸಲ್ಲಿಸಿದ್ದು, ಸದರಿ ಅರ್ಜಿಯಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ: 5.12.2002 ರಂದು ತೀರ್ಪು ನೀಡಿ, ಶ್ರೀ ಜಿ.ಟಿ. ಚಂದ್ರಶೇಖರಪ್ಪ ರವರಿಗೆ ಅಧೀಕ್ಷಕ ಇಂಜಿನಿಯರ್ ಹುದ್ದೆಗೆ ಅವರಿಗಿಂತ ಸೇವೆಯಲ್ಲಿ ಕಿರಿಯರಾದವರಿಗೆ ಪದೋನ್ನತಿ ನೀಡಿದ ದಿನಾಂಕದಿಂದ ಪದೋನ್ನತಿ ನೀಡುವಂತೆ ಹಾಗೂ ತತ್ಪರಿಣಾಮವಾದ ಸೌಲಭ್ಯಗಳನ್ನು ವಿಸ್ತರಿಸುವಂತೆ ನಿರ್ದೇಶನ ನೀಡಿತ್ತು.

ಈ ಮಧ್ಯೆ ಶ್ರೀ ಜಿ.ಟಿ. ಚಂದ್ರಶೇಖರಪ್ಪ ರವರಿಗೆ ದಿನಾಂಕ: 30.12.2002 ರ ಅಧಿಸೂಚನೆಯಲ್ಲಿ ಭವಿಷ್ಯವರ್ತಿಯಾಗಿ ಅಧೀಕ್ಷಕ ಇಂಜಿನಿಯರ್ ಹುದ್ದೆಗೆ ಪದೋನ್ನತಿ ನೀಡಲಾಗಿದ್ದು. ಸದರಿಯವರು ಈಗ ಅಧೀಕ್ಷಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪಿನಂತೆ ತಮಗೆ ಪೂರ್ವಾನ್ವಯವಾಗಿ ಪದೋನ್ನತಿ ನೀಡಿಲ್ಲವೆಂದು, ಶ್ರೀ ಜಿ.ಟಿ. ಚಂದ್ರಶೇಖರಪ್ಪ ರವರು ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂ. 160/2003 ಅನ್ನು ಸಲ್ಲಿಸಿದ್ದಾರೆ. ಈ ಅರ್ಜಿಯು ಇನ್ನೂ ಇತ್ಯರ್ಥವಾಗಬೇಕಾಗಿದ್ದು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪನ್ನು ಪೂರ್ಣವಾಗಿ ಅನುಷ್ಠಾನಗೊಳಿಸಬೇಕಾಗಿದೆ.

ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಇಂಜಿನಿಯರುಗಳ ಜೇಷ್ಠತೆಯ ಸಂಬಂಧ ಭಾರತದ ಸರ್ವೋನ್ನತ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳು ಬಾಕಿ ಇದ್ದು, ಈ ಎಲ್ಲಾ ಅರ್ಜಿಗಳನ್ನು ಆಗಸ್ಟ್ 2003 ರಲ್ಲಿ ಸಂವಿಧಾನ ಪೀಠ ರಚಿಸಿ, ಆ ಪೀಠದ ಮುಂದೆ ಇತ್ಯರ್ಥಪಡಿಸಲು ನಿರ್ದೇಶಿಸಿದೆ. ಹಾಗಾಗಿ ಸಂವಿಧಾನ ಪೀಠವು ಅಂತಿಮವಾಗಿ ತೀರ್ಪು ನೀಡಿದ ನಂತರವೇ ಈ ಇಂಜಿನಿಯರ್ ಪದವೃಂದಗಳ ದಿನಾಂಕ: 11.4.2002 ರ ಎಲ್ಲಾ ತಾತ್ಕಾಲಿಕ ಜೇಷ್ಠತಾ ಪಟ್ಟಿಗಳನ್ನು ಅಂತಿಮಗೊಳಿಸಿ, ಅದರಂತೆ ಪದೋನ್ನತಿಯನ್ನು ಪರಿಷ್ಕರಿಸುವ ಅಗತ್ಯವಿದೆ. ಈ ಸನ್ನಿವೇಶವನ್ನು ಮನಗಂಡು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸುವ ಸಂಬಂಧ ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿಯನ್ನು ಸಲ್ಲಿಸಿರುವುದರಿಂದ, ಶ್ರೀ ಜಿ.ಟಿ. ಚಂದ್ರಶೇಖರಪ್ಪ ರವರಿಗೆ ಅವರಿಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಲಿಂಗರಾಜಯ್ಯ ರವರಿಗೆ ಅಧೀಕ್ಷಕ ಇಂಜಿನಿಯರ್ ಹುದ್ದೆಯಲ್ಲಿ ನೀಡಿರುವ ದಿನಾಂಕ: 24.10.2000 ನೇ ಅರ್ಹತಾ ದಿನಾಂಕವನ್ನಾಗಿ ಆದೇಶ ಸಂಖ್ಯೆ: ಲೋಇ 108 ಸೇಎಸು 2003 ದಿನಾಂಕ: 28.6.2003 ರಲ್ಲಿ ನಿಗದಿಪಡಿಸಲಾಗಿದೆ.

ಶ್ರೀ ಜಿ.ಟಿ. ಚಂದ್ರಶೇಖರಪ್ಪ ನವರು ದಿನಾಂಕ: 30.6.2003 ರಂದು ಮನವಿ ನೀಡಿ ತಮ್ಮ ಹೆಸರನ್ನು ಅಧೀಕ್ಷಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 915ಎ ರಲ್ಲಿ ಸೇರ್ಪಡೆ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಈ ಸೇರ್ಪಡೆ ಮಾಡಿದಲ್ಲಿ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಜೇಷ್ಠತೆಯನ್ನು ಕಾಪಾಡಿಕೊಂಡಿರುವ ವ್ಯಕ್ತಿಗಳಿಗೆ ಯಾವುದೇ ಬಾಧಕ ಆಗುವುದಿಲ್ಲ ಮತ್ತು ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶದ ಉಲ್ಲಂಘನೆ ಆಗುವುದಿಲ್ಲ ಎಂಬುದನ್ನು ಪರಿಗಣಿಸಿ ಶ್ರೀ ಜಿ.ಟಿ. ಚಂದ್ರಶೇಖರಪ್ಪ ನವರು ಸಲ್ಲಿಸಿರುವ ನಿಂದನಾ ಅರ್ಜಿ ಇನ್ನೂ ಇತ್ಯರ್ಥವಾಗಬೇಕಾಗಿರುವುದರಿಂದ ಹಾಗೂ ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: PWD 83 SPG 2002 ದಿನಾಂಕ: 11.4.2002 ರಲ್ಲಿ ಪ್ರಕಟಿಸಲಾಗಿರುವ ಅಧೀಕ್ಷಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 915 ಮತ್ತು 916 ನಡುವೆ ಕ್ರಮ ಸಂಖ್ಯೆ 915ಎ ನ್ನಾಗಿ ಕೆಳಕಂಡಂತೆ ಸೇರ್ಪಡೆ ಮಾಡಲಾಗಿದೆ.

| SE Grd No. | List No. | AE Grd No. | Name of the Engineer | SC/ST | Date of Birth | SE Promotion Date | SE Eligibility Date | Remarks |
|---|---|---|---|---|---|---|---|---|
| 915A | 2 | 1779 | Chandra shekarappa GT | ST | 1.6.50 | 30.12.2002 | 24.10.2000 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 952

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಎ)